# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 315
ಸದಸ್ಯರ ಹೆಸರು : ಶ್ರೀ ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ).
ಉತ್ತರಿಸುವ ದಿನಾಂಕ : 12.07.2018.
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಖಾಸಗಿ ಅನುದಾನಿತ ಶಾಲೆಗಳಲ್ಲಿನ ಶಿಕ್ಷಕರಿಗೆ/ಉಪನ್ಯಾಸಕರಿಗೆ ಫಲಿತಾಂಶವನ್ನು ಮಾನದಂಡವನ್ನಾಗಿಸಿ ಸಂಬಳವನ್ನು ತಡೆಹಿಡಿಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಇಂತಹ ನಿರ್ಧಾರದಿಂದ ಎಷ್ಟು ಶಾಲಾ ಕಾಲೇಜುಗಳ ಸಿಬ್ಬಂದಿಗೆ ತೊಂದರೆಯಾಗಿದೆ; | ಯಾವುದೇ ಶಾಲಾ/ಕಾಲೇಜುಗಳ ಸಿಬ್ಬಂದಿಗಳಿಗೆ ತೊಂದರೆಯಾಗಿರುವುದಿಲ್ಲ. |
| ಇ) | ಇಂತಹ ಅವೈಜ್ಞಾನಿಕ ನಿರ್ಧಾರವನ್ನು ಸರ್ಕಾರ ಹಿಂಪಡೆಯುವುದೇ? (ಸರ್ಕಾರದ ಆದೇಶದ ಪ್ರತಿಯನ್ನು ನೀಡುವುದು) | ಅನುದಾನಿತ ಪ್ರೌಢಶಾಲೆಗಳ ಎಸ್.ಎಸ್.ಎಲ್.ಸಿ., ಫಲಿತಾಂಶವು ಕಳೆದ 5 ವರ್ಷಗಳ ಜಿಲ್ಲಾ ಸರಾಸರಿಗಿಂತ ಕಡಿಮೆಯಿದ್ದಲ್ಲಿ, ಅಂತಹ ಶಾಲೆಗಳ ಸಿಬ್ಬಂದಿಗಳ ವಿವರಣೆ ಪಡೆದು ಶಿಸ್ತಿನ ಕ್ರಮ ಜರುಗಿಸಲು ಹೊರಡಿಸಿರುವ ಸುತ್ತೋಲೆ ಸಂಖ್ಯೆ : ಸಿ8(8)ಶಾ.ಶಿ.ಅ ಪರೀಕ್ಷೆ-01/2017-18, ದಿನಾಂಕ : 03/07/2018ರ ಪ್ರತಿಯನ್ನು ಅನುಬಂಧಿಸಿದೆ. |

(ಸಂಖ್ಯೆ: ಇಡಿ 373 ಎಸ್‌ಇಎಸ್ 2018)

(ಎನ್.ಮಹೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.

ಕರ್ನಾಟಕ ಸರ್ಕಾರ

ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಕಛೇರಿ, ಬೆಂಗಳೂರು-01

ಸಂಖ್ಯೆ:ಸಿ8[8]ಶಾಶಿಅ ಪರೀಕ್ಷೆ-01/2017-18 ದಿನಾಂಕ.03.07.2018

ಸುತ್ತೋಲೆ

ವಿಷಯ:-ಖಾಸಗಿ ಅನುದಾನಿತ ಪ್ರೌಢಶಾಲೆಗಳಲ್ಲಿ ಕಳೆದ 5 ವರ್ಷಗಳಲ್ಲಿ ಜಿಲ್ಲಾ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಫಲಿತಾಂಶ ಪಡೆದ ಶಾಲೆಗಳಿಗೆ ಅನುದಾನ ತಡೆಹಿಡಿಯು ವಿಚಾರದ ಬಗ್ಗೆ.

ಉಲ್ಲೇಖ:1]ನಿರ್ದೇಶಕರು, ಪ್ರೌಢ ಶಿಕ್ಷಣ, ಆಯುಕ್ತರ ಕಛೇರಿ ಇವರ ಸುತ್ತೋಲೆ ಸಮ ಸಂಖ್ಯೆ ಪತ್ರ ದಿನಾಂಕ: 24.05.2018.

2]ಮಾನ್ಯ ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು, ಇವರ ಪತ್ರ ಸಂಖ್ಯೆ: ಕವಿಕ: ಸಕ: 088 :2018, ದಿನಾಂಕ: 29.06.2018.

3]ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರ ಟಿಪ್ಪಣಿ ದಿನಾಂಕ: 30.06.2018.

4]ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ, [ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ] ಬೆಂಗಳೂರು ಇವರ ಪತ್ರ ಸಂಖ್ಯೆ: ಇಡಿ 13 ಎಸ್‌ಇಪಿ 2018 [ಭಾ] ದಿನಾಂಕ: 02.07.2018

--------****--------

ಉಲ್ಲೇಖ [1]ರಲ್ಲಿ ಖಾಸಗಿ ಅನುದಾನಿತ ಪ್ರೌಢಶಾಲೆಗಳಲ್ಲಿ ಎಸ್.ಎಸ್.ಎಲ್.ಸಿ ಪರೀಕ್ಷಾ ಫಲಿತಾಂಶವು ಕಳೆದ ಐದು ವರ್ಷಗಳಿಂದ ಜಿಲ್ಲಾ ಸರಾಸರಿಗಿಂತ ಕಡಿಮೆ ಫಲಿತಾಂಶ ಬಂದಿರುವ ಶಾಲೆಗಳಿಗೆ ಕರ್ನಾಟಕ ಶಿಕ್ಷಣ ಅಧಿನಿಯಮ 1983ರ ಕಲಂ-39 ಹಾಗೂ ಕರ್ನಾಟಕ ಶಿಕ್ಷಣ ಅಧಿನಿಯಮ 1983ರ ಕಲಂ-53ರ ಪ್ರಕಾರ ಅನುದಾನಿತ ಶಾಲೆಗಳ ಅನುದಾನಿತ ಶಿಕ್ಷಣ ಕಾಯ್ದೆಯನ್ನು ಪಾಲಿಸುವಲ್ಲಿ ವಿಫಲರಾದ ಶಾಲೆಗಳ ಬಗ್ಗೆ ವರದಿ ನೀಡಲು ಎಲ್ಲಾ ಉಪನಿರ್ದೇಶಕರುಗಳಿಗೆ ಸೂಚಿಸಲಾಗಿತ್ತು. ಈ ಬಗ್ಗೆ ಮಾನ್ಯ ಸಚಿವರು ದಿನಾಂಕ 23.06.2018 ರಂದು ಎಲ್ಲಾ ಮಾನ್ಯ ವಿಧಾನ ಪರಿಷತ್ ಸದಸ್ಯರುಗಳೊಂದಿಗೆ ಸಭೆಯನ್ನು ನಡೆಸಿದಾಗ ಕೆಲವು ಉಪನಿರ್ದೇಶಕರುಗಳು/ಕ್ಷೇತ್ರ ಶಿಕ್ಷಣಾಧಿಕಾರಿಗಳು/ಉಪನಿರ್ದೇಶಕರುಗಳು (ಪದವಿ ಪೂರ್ವ) ಶಿಕ್ಷಕರ ಸಂಬಳವನ್ನು ನಿಲ್ಲಿಸಲು ಆದೇಶ ನೀಡಿದ್ದಾರೆಂದು ತಿಳಿಸಿದಾಗ ಮಾನ್ಯ ಸಚಿವರ ಸೂಚನೆ ಮೇರೆಗೆ ತಕ್ಷಣ ದಿನಾಂಕ 23.06.2018ರಂದು ಇ-ಮೇಲ್ ಮೂಲಕ ಯಾವುದೇ ಶಿಕ್ಷಕರ ಸಂಬಳ ನಿಲ್ಲಿಸಬಾರದು ಎಂದು ಪ್ರಧಾನ ಕಾರ್ಯದರ್ಶಿಯವರ ಪತಿಯಿಂದ ಸೂಚನೆ ನೀಡಲಾಗಿದೆ.

ಈ ಹಿನ್ನೆಲೆಯಲ್ಲಿ ಮಾನ್ಯ ವಿಧಾನ ಪರಿಷತ್ ಸಭಾಪತಿಯವರು ಅನುದಾನಿತ ಪ್ರೌಢಶಾಲೆಗಳಲ್ಲಿ ಕಳೆದ ಐದು ವರ್ಷಗಳಲ್ಲಿ ಜಿಲ್ಲಾ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಫಲಿತಾಂಶ ಬಂದಿರುವ ಶಾಲೆಗಳಿಗೆ ವೇತನ ತಡೆ ಹಿಡಿದಿರುವ ವಿಚಾರದಲ್ಲಿ ಉಲ್ಲೇಖ [2]ರಲ್ಲಿ ಮಾನ್ಯ ಶಿಕ್ಷಣ ಸಚಿವರಿಗೆ ಪತ್ರ ನೀಡಿರುತ್ತಾರೆ. ಶಿಕ್ಷಕರ ಸಾಮೂಹಿಕ, ಶೈಕ್ಷಣಿಕ ಜವಾಬ್ದಾರಿಯ ಆಶಯಗಳನ್ನು ಉಳಿಸಿಕೊಂಡು ಸರ್ಕಾರಿ ಶಾಲೆಗಳ ಶಿಕ್ಷಕರುಗಳಿಗೆ ಎಚ್ಚರಿಕೆ ನೀಡಿ, ವೇತನ ಪಾವತಿಸುವಂತೆಯೇ ಅನುದಾನಿತ ಶಾಲೆಗಳ ಶಿಕ್ಷಕರಿಗೂ ಅನ್ವಯಿಸಿ ವೇತನವನ್ನು ಪಾವತಿಸಲು ಈಗಿರುವ ಆದೇಶವನ್ನು ಮಾರ್ಪಡಿಸುವುದು ಸೂಕ್ತವೆಂದು ಅಭಿಪ್ರಾಯಿಸಿರುತ್ತಾರೆ.

ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಉಲ್ಲೇಖ-3ರಲ್ಲಿ ದಿನಾಂಕ: 30.06.2018ರಂದು ಟಿಪ್ಪಣಿ ನೀಡಿ ಖಾಸಗಿ ಅನುದಾನಿತ ಪ್ರೌಢಶಾಲೆಗಳಲ್ಲಿ ಎಸ್.ಎಸ್.ಎಲ್.ಸಿ ಫಲಿತಾಂಶವು ಕಳೆದ ಐದು ವರ್ಷಗಳಲ್ಲಿ ಜಿಲ್ಲಾ ಸರಾಸರಿಗಿಂತ ಕಡಿಮೆ ಇರುವ ಕಾರಣಕ್ಕಾಗಿ ಸದರಿ ಶಾಲೆಗಳ ಸಿಬ್ಬಂದಿಯ ವೇತನ ತಡೆಹಿಡಿದಿರುವ ಕ್ರಮದ ಬಗ್ಗೆ ಮಾನ್ಯ ಸಭಾಪತಿಗಳು,

ವಿಧಾನ ಪರಿಷತ್ ರವರು ನೀಡಿರುವ ಪತ್ರದಂತೆ ಸೂಕ್ತ ಆದೇಶ ಹೊರಡಿಸುವಂತೆ ಸೂಚಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಉಲ್ಲೇಖ[4]ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಪತ್ರದಂತೆ ಹೊಸ ಸುತ್ತೋಲೆ ಮಂಡಿಸಲು ಸೂಚಿಸಲಾಗಿರುತ್ತದೆ.

ಎಸ್.ಎಸ್.ಎಲ್.ಸಿ ಪರೀಕ್ಷೆಯ ಉತ್ತಮ ಗುಣಮಟ್ಟದ ಫಲಿತಾಂಶ ಸುಧಾರಣೆಯ ಬಗ್ಗೆ ಹಾಗೂ ಉತ್ತಮ ಶೈಕ್ಷಣಿಕ ಗುಣಮಟ್ಟದ ಆಶಯವನ್ನು ಪೂರ್ಣಗೊಳಿಸುವ ನಿಟ್ಟಿನಲ್ಲಿ ಉಲ್ಲೇಖ [1]ರ ಈ ಕಛೇರಿಯಲ್ಲಿನ ಮಾರ್ಗಸೂಚಿಯಲ್ಲಿನ ಅಂಶಗಳನ್ನು ಪುನರುಚ್ಚರಿಸುತ್ತಾ, ಈ ಕೆಳಕಂಡಂತೆ ಅಗತ್ಯ ಕ್ರಮ ವಹಿಸಲು ತಿಳಿಸಿದೆ.

ಪ್ರಾಥಮಿಕ ಹಂತದ 1ನೇ ತರಗತಿಯಿಂದ ಪ್ರಾರಂಭಿಸಿ 9ನೇ ತರಗತಿಯವರೆವಿಗೂ ಬೋಧನಾ ವಿಷಯಗಳನ್ನು ಸರಿಯಾಗಿ ಗ್ರಹಿಸದೇ ವಿದ್ಯಾರ್ಥಿಗಳು ನೇರವಾಗಿ ಎಸ್.ಎಸ್.ಎಲ್.ಸಿ ಪರೀಕ್ಷೆಗೆ ಕುಳಿತುಕೊಳ್ಳುವುದು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಕಡಿಮೆ ಫಲಿತಾಂಶ ಪಡೆಯಲು ಬಹು ಮುಖ್ಯ ಕಾರಣವಾಗುತ್ತದೆ, ಈ ನಿಟ್ಟಿನಲ್ಲಿ ಮಕ್ಕಳ ಗ್ರಹಿಕೆಗೆ ಪೂರಕವಾಗುವಂತಹ ವಾತಾವರಣ, ಶಿಕ್ಷಕರ ಬೋಧನಾ ಸಾಮರ್ಥ್ಯದ ಕೊರತೆಯನ್ನು ಗುರುತಿಸುವಂತಹ ಕಾರ್ಯ ಸಮರ್ಪಕವಾಗಿ ಇಲಾಖೆಯಿಂದ ನಡೆಸಬೇಕಿದೆ. ವಿದ್ಯಾರ್ಥಿಗಳ ಗ್ರಹಿಕೆ ಯಾವ ವಿಷಯದಲ್ಲಿ ಮತ್ತು ಯಾವ ಹಂತದಲ್ಲಿ ವೈಫಲ್ಯವಾಗಿದೆ ಎಂಬ ಬಗ್ಗೆ ವಿಶ್ಲೇಷಿಸುವ ಕಾರ್ಯವನ್ನು ಆಯಾ ಕ್ಷೇತ್ರ ಶಿಕ್ಷಣಾಧಿಕಾರಿಗಳ ಮತ್ತು ಸಮೂಹ ಸಮನ್ವಯಾಧಿಕಾರಿಗಳ ಸಹಯೋಗದೊಂದಿಗೆ ಹಮ್ಮಿಕೊಳ್ಳತಕ್ಕದ್ದು.

ಈಗಾಗಲೇ 2017-18ನೇ ಸಾಲಿನಿಂದ ರಾಜ್ಯ ಸಾಧನಾ ಸಮೀಕ್ಷೆಯು ನಡೆಯುತ್ತಿದ್ದು, ಅದರ ಫಲಿತಾಂಶವನ್ನು ವಿಶ್ಲೇಷಿಸಿ ಪ್ರತಿಯೊಂದು ತರಗತಿಯಲ್ಲಿ ಕಡಿಮೆ ಫಲಿತಾಂಶ ಇರುವ 'ಸರ್ಕಾರಿ'/ 'ಅನುದಾನಿತ' ಶಾಲೆಗಳಲ್ಲಿ ಶಿಕ್ಷಕರ ವಿವರಣೆಯನ್ನು ಪಡೆಯುವ ಬಗ್ಗೆ ಕ್ರಮ ವಹಿಸುವುದು.

ಪ್ರಸ್ತುತ ಶೈಕ್ಷಣಿಕ ವರ್ಷದಲ್ಲಿ ಕಡಿಮೆ ಫಲಿತಾಂಶದ ಸಾಧನೆ ಮಾಡಿರುವ ಮಕ್ಕಳ/ಶಿಕ್ಷಕರಿಗೆ ವಿಶೇಷ ಪ್ರಶಿಕ್ಷಣವನ್ನು ಸಂಬಂಧಪಟ್ಟ ಡಯಟ್/ಬಿಆರ್‌ಸಿ ರವರ ವತಿಯಿಂದ ನೀಡಿ, ಮುಂದಿನ ಶೈಕ್ಷಣಿಕ ವರ್ಷದಲ್ಲಿ ಶಿಕ್ಷಕರು ಫಲಿತಾಂಶವನ್ನು ಸುಧಾರಿಸಲು ಸೂಕ್ತ ಕ್ರಮ ವಹಿಸುವುದು.

ಸರ್ಕಾರಿ/ಅನುದಾನಿತ ಪ್ರೌಢಶಾಲೆಗಳಿಗೆ ಸಂಬಂಧಪಟ್ಟಂತೆ ಕಡಿಮೆ ಫಲಿತಾಂಶ ಬಂದಂತಹ ಶಾಲೆಗಳಿಗೆ ಆಯಾ ಜಿಲ್ಲಾ ಹಂತದಲ್ಲಿರುವ ವಿಷಯ ಪರಿವೀಕ್ಷಕರು, ಡಯಟ್ ಉಪನ್ಯಾಸಕರು ಮತ್ತು ಬಿಆರ್‌ಸಿ ರವರನ್ನು ನಿಯೋಜಿಸಿ ಶಾಲೆಯಲ್ಲಿನ ಶೈಕ್ಷಣಿಕ ಚಟುವಟಿಕೆಗಳನ್ನು ಪರಿಶೀಲಿಸುವ ಜವಾಬ್ದಾರಿಯನ್ನು ವಹಿಸಲು ಆಯಾ ಜಿಲ್ಲಾ ಉಪನಿರ್ದೇಶಕರು ಕ್ರಮ ವಹಿಸತಕ್ಕದ್ದು ಮತ್ತು ಡಯಟ್ ವತಿಯಿಂದ ಆಂಗ್ಲ, ಗಣಿತ, ವಿಜ್ಞಾನ ವಿಷಯಗಳನ್ನು ಬೋಧಿಸುವ ಶಿಕ್ಷಕರಿಗೆ ಸೂಕ್ತ ತರಬೇತಿ ಹಮ್ಮಿಕೊಳ್ಳುವುದು.

ಕಡಿಮೆ ಫಲಿತಾಂಶ ಪಡೆದಂತಹ ಶಾಲೆಗಳಲ್ಲಿ ಮುಖ್ಯ ಶಿಕ್ಷಕರು ಪ್ರತಿ ತಿಂಗಳು ಎಸ್.ಡಿ.ಎಂ.ಸಿ /ಪೋಷಕರ ಸಭೆ ಏರ್ಪಡಿಸಿ ಘಟಕ ಪರೀಕ್ಷೆ\ಮಾಹೆವಾರು ಪರೀಕ್ಷೆಗಳನ್ನು ನಡೆಸುವುದು ಹಾಗೂ ವಿದ್ಯಾರ್ಥಿಗಳಿಗೆ ವೈಯಕ್ತಿಕ ಪ್ರೊಫೈಲ್ ನಿರ್ವಹಣೆ, ಇತ್ಯಾದಿ ಕ್ರಮಗಳನ್ನು ವಹಿಸಿ, ಎಸ್.ಎಸ್.ಎಲ್.ಸಿ ಫಲಿತಾಂಶ ವೃದ್ಧಿಗೆ ಕೈಗೊಳ್ಳುತ್ತಿರುವ ಕ್ರಮಗಳ ಬಗ್ಗೆ ಪೋಷಕರಿಗೆ ಮನವರಿಕೆ ಮಾಡುವ ಬಗ್ಗೆ ಕ್ರಮ ವಹಿಸುವುದು.

ಮೇಲೆ ತಿಳಿಸಿರುವ ಕ್ರಮದ ಹೊರತು ಯಾವುದೇ ಅನುದಾನಿತ ಪ್ರೌಢಶಾಲೆಗಳಲ್ಲಿ ಕಳೆದ ಐದು ವರ್ಷಗಳಲ್ಲಿ ಎಸ್.ಎಸ್.ಎಲ್.ಸಿ ಫಲಿತಾಂಶ ಕಡಿಮೆ ಬಂದಂತಹ ಶಾಲೆಗಳಿಗೆ ಉಲ್ಲೇಖ-4ರ ಸರ್ಕಾರದ ಪತ್ರದಲ್ಲಿನ ನಿರ್ದೇಶನದಂತೆ ವೇತನಾನುದಾನವನ್ನು ತಡೆಹಿಡಿಯಬಾರದಾಗಿ ಕಟ್ಟುನಿಟ್ಟಾಗಿ ಸೂಚಿಸಿದೆ. ಒಂದು ವೇಳೆ ಶಿಕ್ಷಕರ ಬೇಜವಾಬ್ದಾರಿಯಿಂದ ಮಕ್ಕಳ ಫಲಿತಾಂಶ ಕಡಿಮೆ ಆಗುವುದಾದರೆ ಅಂತಹ ಸರ್ಕಾರಿ/ಅನುದಾನಿತ ಶಿಕ್ಷಕರ ಮೇಲೆ ಕೆ.ಸಿ.ಎಸ್.ಆರ್ ನಿಯಮಾವಳಿಯಂತೆ ಶಿಸ್ತಿನ ಕ್ರಮ ಜರುಗಿಸುವುದು ಹಾಗೂ ಸರ್ಕಾರಕ್ಕೆ ವರದಿ ಸಲ್ಲಿಸುವುದು.

ಆಯುಕ್ತರು
ಸಾರ್ವಜನಿಕ ಶಿಕ್ಷಣ ಇಲಾಖೆ

ಪ್ರತಿಯನ್ನು:-

1. ಮಾನ್ಯ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಗಳು, [ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ]ವಿಧಾನಸೌಧ, ಬೆಂಗಳೂರು-1 ಇವರಿಗೆ ಗೌರವಪೂರ್ವಕವಾಗಿ ಸಲ್ಲಿಸುತ್ತಾ, ಮೇಲ್ಕಂಡ ಅಂಶಗಳನ್ನು ಮಾನ್ಯ ಸಚಿವರ ಅವಗಾಹನೆಗೆ ತರಲು ಕೋರಿದೆ.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ, [ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ] ಸರ್ಕಾರದ ಸಚಿವಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು-01 ಇವರಿಗೆ ಗೌರವಗಳೊಂದಿಗೆ ಮಾಹಿತಿಗಾಗಿ ಸಲ್ಲಿಸಿದೆ.
3. ರಾಜ್ಯದ ಎಲ್ಲಾ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ರವರಿಗೆ ಗೌರವಗಳೊಂದಿಗೆ ಸೂಕ್ತ ಕ್ರಮಕ್ಕಾಗಿ.
4. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಢ / ಗುಲ್ಬರ್ಗ ರವರಿಗೆ ಸೂಕ್ತ ಕ್ರಮಕ್ಕಾಗಿ,
5. ರಾಜ್ಯದ ಎಲ್ಲಾ ಜಿಲ್ಲಾ ಉಪನಿರ್ದೇಶಕರು /ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ರವರಿಗೆ ಕಳುಹಿಸುತ್ತಾ, ಮೇಲ್ಕಂಡ ಸುತ್ತೋಲೆಯಲ್ಲಿನ ಎಲ್ಲಾ ಅಂಶಗಳನ್ನು ಅನುಪಾಲಿಸಲು ಕಡ್ಡಾಯವಾಗಿ ಸೂಚಿಸಿದೆ.
6. ಕಛೇರಿ ಕಡತದ ರಕ್ಷಾ ಪ್ರತಿ.